ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಉಂಟಾದ ಜಲ ಪ್ರಳಯದ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

167 (304) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಇತ್ತೀಚೆಗೆ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಉಂಟಾದ ಜಲ ಪ್ರಳಯದಲ್ಲಿ ಒಟ್ಟು ಎಷ್ಟು ಮನೆಗಳು ಪೂರ್ಣ ಪ್ರಮಾಣದಲ್ಲಿ ನಾಶ ಹೊಂದಿರುತ್ತದೆ; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಪೂರ್ಣ ಪ್ರಮಾಣದಲ್ಲಿ ಮನೆ ಕಳೆದುಕೊಂಡವರಿಗೆ ನೀಡಿದ ಪರಿಹಾರದ ಮೊತ್ತವೆಷ್ಟು;

(ಇ) ಪರಿಹಾರ ನೀಡಲು ಬಾಕಿ ಇರುವವರ ಸಂಖ್ಯೆ ಎಷ್ಟು; ಎಷ್ಟು ಜನರಿಗೆ ಪರಿಹಾರ ನೀಡಲಾಗಿದೆ; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು)

(ಈ) ಎಷ್ಟು ಮನೆಗಳು ಭಾಗಶಃ ನಾಶವಾಗಿವೆ; ಈ ಪೈಕಿ ಎಷ್ಟು ಜನರಿಗೆ ಪರಿಹಾರ ನೀಡಲಾಗುವುದು ಭಾಗಶಃ ಮನೆ ಕಳೆದುಕೊಂಡವರಿಗೆ ನೀಡಿದ ಪರಿಹಾರದ ಮೊತ್ತವೆಷ್ಟು;

(ಉ) ಭೂಕುಸಿತದಿಂದ ಎಷ್ಟು ಎಕರೆ ರೈತರ ಭೂಮಿ ನಾಶವಾಗಿದೆ, ಭೂಮಿ ಕಳೆದುಕೊಂಡ ರೈತರಿಗೆ ನೀಡಿದ ಪರಿಹಾರದ ಮೊತ್ತವೆಷ್ಟು; ಬದಲಿ ಭೂಮಿ ನೀಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಊ) ಈ ಜಲ ಪ್ರಳಯಕ್ಕೆ ದಾನಿಗಳಿಂದ ಮತ್ತು ಸಂಘ ಸಂಸ್ಥೆಗಳಿಂದ ಬಂದ ದೇಣಿಗೆ ಎಷ್ಟು; ಇದನ್ನು ಯಾವ ಯಾವ ಉದ್ದೇಶಕ್ಕೆ

ಬಳಸಿಕೊಳ್ಳಲಾಗಿದೆ; ಜಲ ಪ್ರಳಯದಿಂದ ರಸ್ತೆ, ಸೇತುವೆ, ಸಾರ್ವಜನಿಕ ಕಟ್ಟಡಗಳಿಗೆ ಆಗಿರುವ ಒಟ್ಟು ನಷ್ಟದ ಮೊತ್ತವೆಷ್ಟು;

(ಎ) ಜಲ ಪ್ರಳಯದಲ್ಲಿ ಕೃಷಿ ಭೂಮಿ ಕಳೆದುಕೊಂಡವರಿಗೆ ಬದಲಿ ಭೂಮಿಯನ್ನು ಯಾವ ಯಾವ ಗ್ರಾಮದಲ್ಲಿ ನೀಡಲಾಗುವುದು; ಈ ಬಗ್ಗೆ ಭೂಮಿಯನ್ನು ಸರ್ವೇ ಮೂಲಕ ಗುರುತಿಸಲಾಗಿದೆಯೇ? (ಜಿಲ್ಲಾವಾರು ತಾಲ್ಲೂಕುವಾರು ಮಾಹಿತಿ ನೀಡುವುದು)